

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 989
ಸದಸ್ಯರ ಹೆಸರು : ಶ್ರೀ ಅರುಣ ಶಹಾಪೂರ
ಉತ್ತರಿಸಬೇಕಾದ ದಿನಾಂಕ : 10-03-2021
ಉತ್ತರಿಸುವ ಸಚಿವರು : ಮಾನ್ಯ ಸಮಾಜ ಕಲ್ಯಾಣ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕ್ರೈಸ್‌ನ ಪದವಿಪೂರ್ವ ಕಾಲೇಜುಗಳಲ್ಲಿ ಖಾಯಂ ಉಪನ್ಯಾಸಕರ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಖಾಲಿ ಇರುವ ಹುದ್ದೆಗಳೆಷ್ಟು; | ಹೌದು.<br><br>ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಅಧೀನದಲ್ಲಿನ 26 ಮೊರಾರ್ಜಿ ದೇಸಾಯಿ ಪದವಿ ಪೂರ್ವ ವಸತಿ ಕಾಲೇಜುಗಳಲ್ಲಿ 28 ಉಪನ್ಯಾಸಕರ ಹುದ್ದೆಗಳು ಖಾಲಿಯಿರುತ್ತವೆ. |
| ಆ) | ವಸತಿ ಶಾಲೆಗಳಲ್ಲಿನ ಸಹ ಶಿಕ್ಷಕರುಗಳಿಗೆ ವಸತಿ ಕಾಲೇಜುಗಳಲ್ಲಿ ಖಾಲಿ ಇರುವ ಉಪನ್ಯಾಸಕರ ಹುದ್ದೆಗಳಲ್ಲಿ ಬಡ್ತಿ ನೀಡಲು ಕೈಗೊಂಡ ಕ್ರಮಗಳೇನು; ವಸತಿ ಶಾಲೆಗಳ ಸಹ ಶಿಕ್ಷಕರುಗಳ ವಿಷಯವಾರು ಜೇಷ್ಠತಾ ಪಟ್ಟಿಗಳನ್ನು ಪ್ರಕಟಿಸಲಾಗಿದೆಯೇ; ಯಾವ ಕಾಲಮಿತಿಯಲ್ಲಿ ಬಡ್ತಿ ಪ್ರಕ್ರಿಯೆ ಪೂರ್ಣಗೊಳಿಸಲಾಗುವುದು; | ಸರ್ಕಾರದ ಅಧಿಸೂಚನೆ ಸಂಖ್ಯೆ: ಸಕಇ 70 ಮೊದೇಶಾ 2010(P) ದಿನಾಂಕ:04.01.2012ರ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವೃಂದ ಮತ್ತು ನೇಮಕಾತಿ ನಿಯಮಗಳ ತಿದ್ದುಪಡಿಗಳಲ್ಲಿ 50:50 ಅನುಪಾತದಲ್ಲಿ ನೇರ ನೇಮಕಾತಿ ಹಾಗೂ ಮುಂಬಡ್ತಿ ಮುಖಾಂತರ ವಸತಿ ಶಾಲೆಗಳಲ್ಲಿನ ಸಹಶಿಕ್ಷಕರುಗಳನ್ನು ವಸತಿ ಕಾಲೇಜುಗಳ ಉಪನ್ಯಾಸಕರ ಹುದ್ದೆಗಳಿಗೆ ಮುಂಬಡ್ತಿ ನೀಡಲು ಅವಕಾಶ ಕಲ್ಪಿಸಲಾಗಿರುತ್ತದೆ.<br><br>ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಅಧೀನದಲ್ಲಿನ ವಸತಿ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಶಿಕ್ಷಕರ ಸಂಯುಕ್ತ ಅಂತಿಮ ಜೇಷ್ಟತಾ ಪಟ್ಟಿಯನ್ನು ದಿನಾಂಕ: 13.11.2020 ರಂದು ಪ್ರಕಟಿಸಲಾಗಿರುತ್ತದೆ.<br><br>ವಸತಿ ಶಾಲೆಗಳಲ್ಲಿನ ಸಹಶಿಕ್ಷಕರುಗಳಿಗೆ ಖಾಲಿ ಇರುವ ವಸತಿ ಕಾಲೇಜುಗಳ ಉಪನ್ಯಾಸಕರ ಹುದ್ದೆಗಳಿಗೆ ಮುಂಬಡ್ತಿ ನೀಡಲು ಕ್ರಮವಹಿಸಲಾಗುತ್ತಿದೆ. |
| ಇ) | ವಸತಿ ಶಾಲೆ ಶಿಕ್ಷಕರಿಗೆ /ನೌಕರರಿಗೆ ಪ್ರಸ್ತುತ ವರ್ಷ ವರ್ಗಾವಣೆ ಅಧಿನಿಯಮದಂತೆ ಕೌನ್ಸಿಲಿಂಗ್ ಮೂಲಕ ಸಾಮಾನ್ಯ ವರ್ಗಾವಣೆ ನೀಡಲು ತೆಗೆದುಕೊಂಡ ಕ್ರಮಗಳೇನು; ಪ್ರಸ್ತುತ ವರ್ಷ ವರ್ಗಾವಣೆ ನೀಡಿದ್ದಲ್ಲಿ ಕಾರಣವೇನು; ವಸತಿ ಶಾಲೆಗಳಲ್ಲಿ 2012 ರಿಂದ ನವೆಂಬರ್ 2020 ರವರೆಗೂ ಸೇವೆಯಲ್ಲಿರುವಾಗಲೇ ಮೃತಪಟ್ಟಿರುವ ಖಾಯಂ ನೌಕರರೆಷ್ಟು; ಮೃತಪಟ್ಟ ನೌಕರರ ಕುಟುಂಬಕ್ಕೆ ಸಿಗುವ | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಅಧೀನದಲ್ಲಿರುವ ವಸತಿ ಶಾಲಾ/ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ/ ಬೋಧಕೇತರ ಸಿಬ್ಬಂದಿಗಳನ್ನು ಸರ್ಕಾರದ ಆದೇಶ ಸಂಖ್ಯೆ: ಸಕಇ 19 ಮೊದೇಶಾ 2019 ಭಾಗ-2 ದಿನಾಂಕ: 06.07.2019 ರ ವರ್ಗಾವಣೆ ಮಾರ್ಗಸೂಚಿಯಂತೆ 2020-21 ನೇ ಸಾಲಿನಲ್ಲಿ ಕೋವಿಡ್-19 ಹಿನ್ನೆಲೆಯಲ್ಲಿ ಕೌನ್ಸಿಲಿಂಗ್ ಮೂಲಕ ಅಥವಾ ಸಾರ್ವತ್ರಿಕ / ಸಾಮಾನ್ಯ ವರ್ಗಾವಣೆ ಮಾಡಿರುವುದಿಲ್ಲ.<br><br>2012 ರಿಂದ ಈವರೆಗೆ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಅಧೀನದಲ್ಲಿನ ವಸತಿ |

| | | |
|---|---|---|
| | ಪರಿಹಾರವೆಷ್ಟು; ಅವರಲ್ಲಿ ಎಷ್ಟು ಮೃತ ನೌಕರರ ಅವಲಂಬಿತರಿಗೆ ಅನುಕಂಪದ ಆಧಾರದ ಮೇಲೆ ನೌಕರಿಯನ್ನು ನೀಡಲಾಗಿದೆ; ನೀಡದಿದ್ದಲ್ಲಿ, ಕಾರಣವೇನು? | ಶಾಲಾ/ಕಾಲೇಜುಗಳಲ್ಲಿ ಸೇವೆ ಸಲ್ಲಿಸುತ್ತಿದ್ದ ಒಟ್ಟು 37 ಖಾಯಂ ಸಿಬ್ಬಂದಿಗಳು ಮೃತಪಟ್ಟಿರುತ್ತಾರೆ.<br><br>ಸದರಿ ಮೃತಪಟ್ಟವರ ಖಾತೆಯಲ್ಲಿ ಲಭ್ಯವಿರುವ ಗಳಿಕೆ ರಜೆಯ ನಗದೀಕರಣ ಮೊತ್ತ, ವಾರ್ಷಿಕ ಗುಂಪು ವಿಮೆ ಮೊತ್ತ ಹಾಗೂ ಇಡಿಗಂಟಿನ ಪರಿಹಾರವನ್ನು ಒದಗಿಸಲಾಗಿರುತ್ತದೆ.<br><br>37 ನೌಕರರು ಮೃತಪಟ್ಟಿದ್ದು, ಅನುಕಂಪದ ಆಧಾರದ ಮೇಲೆ ಈವರೆಗೂ ಒಟ್ಟು 13 ಸಿಬ್ಬಂದಿಗಳಿಗೆ ಅನುಕಂಪದ ಆಧಾರದ ಮೇಲೆ ಪ್ರಥಮ ದರ್ಜೆ ಸಹಾಯಕರು/ದ್ವಿತಿಯ ದರ್ಜೆಸಹಾಯಕರು ನೇಮಕಾತಿ ಆದೇಶ ನೀಡಿ ವಿವಿಧ ವಸತಿ ಶಾಲೆಗಳಿಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.<br><br>ಬಾಕಿ 24 ಮೃತ ನೌಕರರ ಕುಟುಂಬದ ಸದಸ್ಯರಲ್ಲಿ 08 ಸಿಬ್ಬಂದಿಗಳ ವಿದ್ಯಾರ್ಹತೆ, ಹಾಗೂ ವಯೋಮಿತಿ ಇಲ್ಲದೇ ಅಪ್ರಾಪ್ತ ವಯಸ್ಕರಾಗಿದ್ದ ಕಾರಣ ಹಿಂಬರಹ ನೀಡಲಾಗಿದೆ. ಉಳಿದ 16 ಮೃತ ಕುಟುಂಬದ ಅರ್ಹ ಸದಸ್ಯರುಗಳಿಗೆ ಅನುಕಂಪದ ಆಧಾರದ ಮೇಲೆ ನೇಮಕಾತಿ ನೀಡುವ ಬಗ್ಗೆ ಪ್ರಕ್ರಿಯೆ ಚಾಲ್ತಿಯಲ್ಲಿದೆ. |

ಸಂಖ್ಯೆ: ಸಕಇ 97 ಮೊದೇಶಾ 2021

(ಬಿ. ಶ್ರೀರಾಮುಲು)
ಸಮಾಜ ಕಲ್ಯಾಣ ಸಚಿವರು.